# ಬೋಧನಾ ಕಲಿಕಾ ಸಾಮಗ್ರಿಗಳು: ಅವುಗಳನ್ನು ಬಳಸುವ ಸವಾಲು

**ಜಾವೇದ್ ಅಖ್ತರ್**

ತರಗತಿಯಲ್ಲಿ ಕಲಿಸುವಾಗ ಶಿಕ್ಷಕರು ಅನೇಕ ರೀತಿಯ ಬೋಧನಾ ಕಲಿಕಾ ಸಾಮಗ್ರಿಗಳನ್ನು (TLMs) ಬಳಸುತ್ತಾರೆ. ಉದಾಹರಣೆಗೆ ಭೂಮಿಯ ಬಗೆಗೆ ಕಲಿಸುವಾಗ ಭೂಗೋಲ ಅನ್ನು ಬಳಸುತ್ತಾರೆ; ಅಕ್ಷಾಂಶ ಮತ್ತು ರೇಖಾಂಶ ರೇಖೆಗಳನ್ನು ವಿವರಿಸುವಾಗ ಆಲೂಗಡ್ಡೆ, ಚಾಕು ಮತ್ತು ಕೋನಮಾಪಕಗಳನ್ನು ಬಳಸುತ್ತಾರೆ; ಸಣ್ಣ ಕಲ್ಲುಗಳ ಮೂಲಕ ಲೆಕ್ಕ ಮಾಡುವುದನ್ನು (ಕೂಡಿಸುವುದು, ಕಳೆಯುವುದು) ಕಲಿಸಲಾಗುತ್ತದೆ; ಟಂಡ್ರಾ ಭೂಭಾಗದ ಲಕ್ಷಣವನ್ನು ವಿವರಿಸುವಾಗ ಮೊಬೈಲ್ ಫೋನ್ ಮೂಲಕ ವೀಡಿಯೋ ತೋರಿಸಲಾಗುತ್ತದೆ. ವಿಷಯವನ್ನು ಸ್ಪಷ್ಟವಾಗಿಸಲು ಇಲ್ಲಿ ಭೂಗೋಲ, ಆಲೂಗಡ್ಡೆ, ಚಾಕು, ಕೋನಮಾಪಕ, ಮೊಬೈಲ್ ಫೋನ್ ಮತ್ತು ಸಣ್ಣ ಕಲ್ಲುಗಳನ್ನು ಬಳಸಲಾಗಿದೆ. ಬೋಧನೆ ಮತ್ತು ಕಲಿಕೆಯ ಪ್ರಕ್ರಿಯೆಗೆ ಈ ಸಾಮಗ್ರಿಗಳು ಸಹಾಯ ಮಾಡುತ್ತವೆ. ಉದಾಹರಣೆಗೆ, ಭೂಮಿ ಗುಂಡಗಿದೆ ಎಂದು ಮಕ್ಕಳಿಗೆ ಕಲಿಸುವಾಗ ಆ ಪರಿಕಲ್ಪನೆಯನ್ನು ಸ್ಪಷ್ಟಗೊಳಿಸಲು ಭೂಗೋಲವನ್ನು ತೋರಿಸಿದರೆ, ಅಲ್ಲಿ ಗ್ಲೋಬ್ ಆ ಪರಿಕಲ್ಪನೆಯನ್ನು ವಿವರಿಸಲು ಶಿಕ್ಷಕರಿಗೆ ಸಹಾಯ ಮಾಡುತ್ತದೆ, ಅದೇ ರೀತಿ ಅದನ್ನು ಅರ್ಥ ಮಾಡಿಕೊಳ್ಳಲು ಮಗುವಿಗೂ ಸಹಾಯವಾಗುತ್ತದೆ. ಹೀಗೆ ತರಗತಿಯಲ್ಲಿ ಬೋಧನೆ ಮತ್ತು ಕಲಿಕೆಯ ಪ್ರಕ್ರಿಯೆಯನ್ನು ಸುಗಮಗೊಳಿಸಲು ಬಳಸುವ ಸಾಧನಗಳನ್ನು ಬೋಧನಾ ಕಲಿಕಾ ಸಾಮಗ್ರಿಗಳು ಅಥವಾ TLMs ಎಂದು ಕರೆಯಲಾಗುತ್ತದೆ. ಈ ಸಾಮಗ್ರಿಗಳು ಶಿಕ್ಷಕರು ಮತ್ತು ಕಲಿಸಲಾಗುವ ವಿಷಯಗಳನ್ನು ಅವಲಂಬಿಸಿರುತ್ತವೆ. ತರಗತಿಯಲ್ಲಿ ಈ ಸಾಮಗ್ರಿಗಳನ್ನು ಬಳಸುವುದು ಅಥವಾ ಬಳಸದೇ ಇರುವುದೂ ಶಿಕ್ಷಕರನ್ನೇ ಅವಲಂಬಿಸಿರುತ್ತದೆ. ತರಗತಿಯಲ್ಲಿ ಶಿಕ್ಷಕರು ಈ ಸಾಮಗ್ರಿಗಳನ್ನು ಬಳಸದೆ ಹೋದರೆ ಆಗ ಅವರಿಗೆ TLM ಗಳನ್ನು ಕುರಿತ ಯಾವ ಸವಾಲೂ ಎದುರಾಗುವುದಿಲ್ಲ.

ಶಿಕ್ಷಕ ವೃತ್ತಿಯ ಪ್ರಾಮುಖ್ಯತೆಯನ್ನು ಗಣನೆಗೆ ತೆಗೆದುಕೊಂಡರೆ ಶಿಕ್ಷಕರಾಗಲು ವೃತ್ತಿಸಂಬಂಧಿತ ಶೈಕ್ಷಣಿಕ ಅರ್ಹತೆಯನ್ನು (ಬಿ.ಎಡ್ ಅಥವಾ ಡಿ.ಎಡ್) ಕಡ್ಡಾಯಗೊಳಿಸಲಾಗಿದೆ. ಈ ಕೋರ್ಸಿನ ವಿದ್ಯಾರ್ಥಿಗಳು ತಮ್ಮ ತರಬೇತಿಯ ಸಮಯದಲ್ಲಿ ಹಲವು ಬಗೆಯ ಬೋಧನಾ ಅಭ್ಯಾಸಗಳನ್ನು ಪೂರ್ಣಗೊಳಿಸಬೇಕಾಗುತ್ತದೆ. ಅದನ್ನವರು ಹತ್ತಿರದ ಶಾಲೆಗಳಲ್ಲಿ ಮಾಡುತ್ತಾರೆ. ಬೋಧನಾಭ್ಯಾಸದ (practice teaching) ತರಗತಿಗಳು ತರಬೇತಿಯ ಒಂದು ಬಹುಮುಖ್ಯವಾದ ಅಂಗವಾಗಿರುತ್ತವೆ. ಏಕೆಂದರೆ ಇಲ್ಲಿ ವಿದ್ಯಾರ್ಥಿಗಳು ಬೋಧನಾ ಕಲಿಕಾ ಸಾಮಗ್ರಿಗಳನ್ನು ಬಳಸುವುದು ಹೇಗೆ ಎನ್ನುವುದನ್ನು ಕಲಿಯುತ್ತಾರೆ. ಆದರೆ ಹೆಚ್ಚಿನ ತರಬೇತಿ ಕಾಲೇಜುಗಳಲ್ಲಿ ಬೋಧನಾಭ್ಯಾಸದ ತರಗತಿಗಳು ಕೇವಲ ಔಪಚಾರಿಕ ಆಚರಣೆಯಾಗಿವೆ. ಅಂದರೆ ತರಬೇತಿ ಕಾಲೇಜುಗಳಲ್ಲಿ ಬೋಧನಾಭ್ಯಾಸದ ತರಬೇತಿ ನಡೆಯುವುದೇ ಇಲ್ಲ, ಅಥವಾ ಅದು ನಡೆದರೂ, ಅಲ್ಲಿ ಬೋಧನಾ ಕಲಿಕಾ ಸಾಮಗ್ರಿಗಳನ್ನು ಬಳಸದೇ, ಆ ರೀತಿಯ ಯಾವ ಪೂರ್ವಸಿದ್ಧತೆಗಳಿಲ್ಲದೆ ನಡೆಯುತ್ತಿರುತ್ತದೆ.

ನಾನು ನನ್ನ ಶಾಲಾ ಭೇಟಿಯ ಪ್ರಯುಕ್ತ ರಾಯಪುರದ ಒಂದು ಶಾಲೆಗೆ ಹೋಗಿದ್ದೆ. ಅಲ್ಲಿ ಹತ್ತಿರದ ಶಿಕ್ಷಕ ತರಬೇತಿ ಕಾಲೇಜಿನಿಂದ ಬಂದಿದ್ದ ಕೆಲವು ವಿದ್ಯಾರ್ಥಿಗಳನ್ನು ಭೇಟಿ ಮಾಡಿದೆ. ಅವರು ಅಲ್ಲಿ ವೃತ್ತಿ ಸಂಬಂಧಿತ ತರಬೇತಿ ಪಡೆಯಲು ಶಿಕ್ಷಕರಾಗಿ ಕೆಲಸ

ಮಾಡುತ್ತಿದ್ದರು. ನಾನು ಅವರ ತರಗತಿಗೆ ಹೋದಾಗ ಅವರು ಬೋಧನಾ ಕಲಿಕಾ ಸಾಮಗ್ರಿಗಳನ್ನು ಬಳಸದೇ ಪಾಠ ಮಾಡುತ್ತಿರುವುದು ಕಂಡು ಬಂದಿತು. ಅವರ ಬಳಿ ಬೋಧನೆ ಮಾಡಲು ಪೂರ್ವ ಸಿದ್ಧತೆ ಇರಲಿಲ್ಲ, ಮತ್ತು ಅವರ ತರಬೇತಿ ಕಾಲೇಜಿನ ಒಬ್ಬರೇ ಒಬ್ಬ ಪ್ರೊಫೆಸರ್ ಕೂಡ ಅಲ್ಲಿರಲಿಲ್ಲ. ಹೆಚ್ಚಿನ ತರಬೇತಿ ಕಾಲೇಜುಗಳದ್ದು ಇದೇ ಪರಿಸ್ಥಿತಿ. ಬೋಧನಾಭ್ಯಾಸದ ತರಗತಿಗಳನ್ನು ವಿದ್ಯಾರ್ಥಿಗಳು ಗಂಭೀರವಾಗಿ ಪರಿಗಣಿಸುವುದಿಲ್ಲ, ಒಂದು ವೇಳೆ ಗಂಭೀರವಾಗಿ ತೆಗದುಕೊಂಡರೂ ಹೆಚ್ಚಿನ ಅಂಕಗಳು ಅಥವಾ ಶ್ರೇಣಿಗಳನ್ನು ಗಳಿಸುವ ಸಲುವಾಗಿ TLM ಗಳನ್ನು ಬಳಸುತ್ತಿರುತ್ತಾರೆ. ಇದು ಹೀಗಾದರೆ, ಬೋಧನಾ ಸಾಮಗ್ರಿಗಳನ್ನು ವೃತ್ತಿಕೌಶಲ ಹೊಂದಿದ ಪರಿಣಿತರು ತಯಾರಿಸುತ್ತಾರೆ ಮತ್ತು ಅವರು ಅದಕ್ಕೆ ದೊಡ್ಡ ಮೊತ್ತದ ಬೆಲೆ ವಿಧಿಸುತ್ತಾರೆ. ಈ ಸಾಮಗ್ರಿಗಳು ದುಬಾರಿಯಾಗುವುದರಿಂದ ತರಗತಿಗೆ ಅವುಗಳನ್ನು ತರುವುದು ಕಷ್ಟವಾಗುತ್ತದೆ.

ಶಿಕ್ಷಕರಾಗಲು ಈ ವೃತ್ತಿಸಂಬಂಧಿತ ತರಬೇತಿ ಅವಶ್ಯವಾದರೂ ಸರ್ವ ಶಿಕ್ಷಣ ಅಭಿಯಾನದ ಮೂಲಕ ಸರಕಾರಿ ಶಾಲೆಗಳಿಗೆ ಸೇರುವ ಹೆಚ್ಚಿನ ಶಿಕ್ಷಕರು ಗುತ್ತಿಗೆ ಆಧಾರದಲ್ಲಿ ನೇಮಕಗೊಂಡಿರುತ್ತಾರೆ, ಮತ್ತು ನೇಮಕಗೊಳ್ಳುವ ಸಮಯದಲ್ಲಿ ಅವರಿಗೆ ಶಿಕ್ಷಕ ತರಬೇತಿಯು ಕಡ್ಡಾಯವೇನಲ್ಲ. ಅವರಲ್ಲಿ ಹಲವರು ಶಾಲೆಗೆ ಸೇರಿದ ನಂತರ ತಮ್ಮ ಕಾಲೇಜು ಶಿಕ್ಷಣವನ್ನು ಪೂರೈಸಿದವರು. ನೇಮಕಗೊಳ್ಳುವ ಸಮಯದಲ್ಲಿ ಅವರಿಗೆ ಸಿಕ್ಕ ಗೌರವ ಧನವು ಒಂದು ಸಾವಿರ ರೂಪಾಯಿ. ಹೀಗಾಗಿ ಈ ಕೆಲಸಕ್ಕೆ ಬಹಳ ಜನ ಆಸಕ್ತಿ ತೋರಲಿಲ್ಲ. 2005 ರ ಶಿಕ್ಷಣ ಹಕ್ಕಿನ ಕಾಯಿದೆ ಪ್ರಕಾರ ತರಬೇತಿ ಹೊಂದಿದ ಶಿಕ್ಷಕರನ್ನೇ ನೇಮಿಸಿಕೊಳ್ಳಬೇಕು ಎಂಬ ನಿಯಮ ಜಾರಿಗೆ ಬಂತು. ಹಾಗಾಗಿ ಈಗಾಗಲೇ ಸೇರಿದ ಶಿಕ್ಷಕರಿಗೆ ತರಬೇತಿ ನೀಡಲಾಯಿತು, ಅವರಿಗೆ ಕಲಿಯಬೇಕೆನ್ನುವುದು ಆದ್ಯತೆಯಾಗಿರಲಿಲ್ಲ. ಬದಲಿಗೆ, ಆ ಉದ್ಯೋಗವನ್ನು ಉಳಿಸಿಕೊಳ್ಳಲು ಬೇಕಾದ ಅರ್ಹತೆಯನ್ನು ಗಳಿಸುವುದಷ್ಟೇ ಬೇಕಿತ್ತು. ಎರಡನೆಯದಾಗಿ, ಅದು ದೂರಶಿಕ್ಷಣ ತರಬೇತಿಯಾಗಿತ್ತು. ಒಂದೊಮ್ಮೆ ತರಬೇತಿ ಪಡೆಯುವವರು ಶಿಕ್ಷಕರಾಗಿಯೂ ಕೆಲಸ ಮಾಡುತ್ತಿದ್ದರೆ, ಆಗ ಖಂಡಿತವಾಗಿಯೂ ದೂರಶಿಕ್ಷಣ ತರಬೇತಿಗೂ ಮತ್ತು ಕ್ರಮಬದ್ಧ(regular) ತರಬೇತಿಗೂ ಗುಣಾತ್ಮಕ ವ್ಯತ್ಯಾಸ ಕಂಡುಬರುತ್ತದೆ. ಹಾಗೆ ಶಿಕ್ಷಕರಾಗಿ ಕೆಲಸ ಮಾಡುತ್ತಿದ್ದವರಿಗೆ ಈ ತರಬೇತಿ ಪ್ರಯೋಜನಕ್ಕೆ ಬರಲಿಲ್ಲ. ಅವರಿಗೆ ತರಬೇತಿಯೇನೋ ಸಿಕ್ಕಿತು, ಮತ್ತು ಉದ್ಯೋಗಕ್ಕೆ ಅವಶ್ಯವಿರುವ ಅರ್ಹತೆಯೂ ಸಿಕ್ಕಿತು. ಆದರೆ ಅವರ ಸಾಮರ್ಥ್ಯ ಮಾತ್ರ ಬದಲಾಗಲಿಲ್ಲ.

ಕಲಿಕೆಯೆಂಬುದು ಇಡೀ ಜೀವಿತಾವಧಿಯ ಪ್ರಕ್ರಿಯೆಯಾಗಿದೆ. ಹೀಗಾಗಿ ಸೇವಾ ನಿರತ ಶಿಕ್ಷಕರ ವೃತ್ತಿಪರತೆಯನ್ನು ಹೆಚ್ಚಿಸಲು ಅವರಿಗೆ ನಿರಂತರವಾಗಿ, ಒಂದು ಕ್ರಮಬದ್ಧ ರೀತಿಯಲ್ಲಿ ತರಬೇತಿಯನ್ನು ಯೋಜಿಸಲಾಯಿತು. ಸರ್ವ ಶಿಕ್ಷಣ ಅಭಿಯಾನದ ಅಡಿಯಲ್ಲಿ ಸೇವಾನಿರತರಿಗೆ ತರಬೇತಿ ಕಾರ್ಯಕ್ರಮಗಳು ನಡೆಯುತ್ತಲೇ ಬಂದವು. ಈಗ ಯಾವ ಪರಿಸ್ಥಿತಿ ಇದೆಯೆಂದರೆ ಯಾವ ಶಿಕ್ಷಕರೂ ಅದರಲ್ಲಿ ಪಾಲ್ಗೊಳ್ಳಲು ತಯಾರಿಲ್ಲ. ಸರಕಾರಿ ಮತ್ತು ಕೆಲವು ಸರಕಾರೇತರ ಸಂಸ್ಥೆಗಳೂ ಈ ಕ್ಷೇತ್ರಕ್ಕೆ ಕಾಲಿಟ್ಟಿವೆ, ಇವತ್ತಿಗೂ ತರಬೇತಿ ನಡೆಯುತ್ತಲೇ ಇದೆ. ಇಲ್ಲಿ ಮೊದಲೇ ಸಿದ್ಧಪಡಿಸಿದ ಬೋಧನಾ ಕಲಿಕಾ ಸಾಮಗ್ರಿಗಳನ್ನು ನೀಡಲಾಗುತ್ತದೆ, ಕೆಲವೊಮ್ಮೆ ಈ ತರಬೇತಿ ಶಿಬಿರಗಳಲ್ಲಿಯೇ ಅವುಗಳನ್ನು ತಯಾರಿಸಲಾಗುತ್ತದೆ, ಅಥವಾ ಸ್ವತಃ ತಯಾರಿಸುವಂತೆ ಶಿಕ್ಷಕರಿಗೆ ಪ್ರೇರಣೆ ನೀಡಲಾಗುತ್ತದೆ. ಆದರೆ ಅವುಗಳನ್ನು ಹೇಗೆ ಬಳಸುವುದು ಎನ್ನುವುದನ್ನು ಕಲಿಸುವುದರ ಬಗೆಗೆ ಹೆಚ್ಚಿನ ಗಮನ ನೀಡುವುದಿಲ್ಲ, ಏನಾದರೂ ಸಣ್ಣ ತೊಂದರೆ ಬಂದರೆ ಶಿಕ್ಷಕರು ಬಳಸುವುದನ್ನೇ ನಿಲ್ಲಿಸಿಬಿಡುತ್ತಾರೆ. ಅಷ್ಟೇ ಅಲ್ಲ, ಆ ಸಾಮಗ್ರಿಗಳು ಬಹುದಿನಗಳವರೆಗೆ ಬಾಳಬೇಕು ಎಂದು

ಶಿಕ್ಷಕರು ಅವುಗಳನ್ನು ಪದೇಪದೇ ಬಳಸುವುದಿಲ್ಲ. ಒಂದುವೇಳೆ ಈ ಸಾಮಗ್ರಿಗಳು ಹಾಳಾದರೆ ಮತ್ತೆ ಎಲ್ಲಿಂದ ತರುವುದು, ಅಥವಾ ಮೇಲಿನ ಅಧಿಕಾರಿಗಳು ನೋಡಲು ಬಂದಾಗ ಅವು ಕೆಟ್ಟು ಹೋಗಿದ್ದು ತೋರಿಸಲೇ ಸಾಧ್ಯವಾಗದಿದ್ದರೆ ಏನು ಮಾಡುವುದು ಎಂಬ ಭಯ ಶಿಕ್ಷಕರಿಗೆ. ಇದೆಲ್ಲದರ ಪರಿಣಾಮ ಶಾಲೆಯ ಈ ಎಲ್ಲಾ ಸಾಮಗ್ರಿಗಳೂ ಬೀಗ ಹಾಕಿದ ಕಪಾಟಿನಲ್ಲಿಯೇ ಇರುತ್ತವೆ.

ಸರ್ವ ಶಿಕ್ಷಣ ಅಭಿಯಾನದ ಅಡಿಯಲ್ಲಿ ಜನವಸತಿ ಇರುವ ಪ್ರತಿ ಸ್ಥಳದ ಒಂದು ಕಿ.ಮೀ ಆವರಣದ ಒಳಗೆ ಒಂದು ಶಾಲೆ ಆರಂಭವಾಗಿದೆ. ಇವು ಇಪ್ಪತ್ತು ಹಾಗೂ ಅದಕ್ಕೂ ಹೆಚ್ಚಿನ ಮಕ್ಕಳೊಂದಿಗೆ ಆರಂಭವಾದವು, ಆದರೆ ಅಲ್ಲಿಗೆ ಒಬ್ಬರೋ ಇಬ್ಬರೋ ಶಿಕ್ಷಕರು ನೇಮಕಗೊಂಡರು. ಈಗ ಅಲ್ಲಿ ಐದು ತರಗತಿಗಳಿವೆ, ಆದರೆ ಶಿಕ್ಷಕರು ಮಾತ್ರ ಇಬ್ಬರೊ ಮೂವರೋ ಅಷ್ಟೇ. ಹೀಗಾಗಿ ಶಿಕ್ಷಕರು ಸದಾ ತರಗತಿಯೊಳಗೆಯೇ ಇರಬೇಕಾಗುತ್ತದೆ, ಅವರ ಹೆಚ್ಚಿನ ಸಮಯ ಮಕ್ಕಳನ್ನು ಸಂಭಾಳಿಸುವುದರಲ್ಲೇ ಮುಗಿಯುತ್ತದೆ. ಕಲಿಸುವುದು ಹಿಂದೆ ಬೀಳುತ್ತದೆ. ಅಂತಹ ಸನ್ನಿವೇಶದಲ್ಲಿ ಯಾರಿಗಾದರೂ ಬೋಧನಾ ಕಲಿಕಾ ಸಾಮಗ್ರಿಗಳನ್ನೂ ಬಳಸಬೇಕು ಎಂಬ ಯೋಚನೆ ಬರುವುದಾದರೂ ಹೇಗೆ?

ನಾನು ರಾಯಪುರದ (ಛತ್ತೀಸ್‌ಘರ್) ಶಾಲೆಗೆ ಭೇಟಿಯಿತ್ತ ಸಮಯದಲ್ಲಿ ಶಾಲೆಯ ಹೆಚ್ಚಿನ ಶಿಕ್ಷಕರು ಎಲ್ಲಾ ಸವಾಲುಗಳ ನಡುವೆಯೂ ಬೋಧನಾ ಕಲಿಕಾ ಸಾಮಗ್ರಿಗಳನ್ನು ಬಳಸುತ್ತಿರುವುದು ಕಂಡು ಬಂತು. ಉದಾಹರಣೆಗೆ, ಮೊಬೈಲ್ ಫೋನ್ ಮೂಲಕ ಟಂಡ್ರಾ ಪ್ರದೇಶದ ವೀಡಿಯೊ ತೋರಿಸುವುದು, ಸಣ್ಣ ಕಲ್ಲುಗಳ ಮೂಲಕ ಲೆಕ್ಕ ಮಾಡಿಸುವುದು, ಋತು ಬದಲಾವಣೆಗಳನ್ನು ವಿವರಿಸಲು LED ಮೂಲಕ ವೀಡಿಯೊ ತೋರಿಸುವುದು, ತೇವ ಮಾಡಿದ ಹತ್ತಿಯ ಒಳಗೆ ಬೀಜಗಳನ್ನಿಟ್ಟು ಅವು ಮೊಳಕೆಯೊಡೆಯುವುದನ್ನು ತೋರಿಸುವುದು, ಭಿನ್ನರಾಶಿಯ ವಿವಿಧ ಪ್ರಕಾರಗಳನ್ನು ವಿವರಿಸಲು ಕಾರ್ಡುಗಳನ್ನು ಬಳಸುವುದು, ಸೂಕ್ಷ್ಮದರ್ಶಕದ (microscope) ಮೂಲಕ ಜೀವಕೋಶಗಳನ್ನು ಅವಲೋಕಿಸುವುದು ಹೀಗೆ ಅನೇಕ ರೀತಿಯಲ್ಲಿ ಸಾಮಗ್ರಿಗಳು ಬಳಕೆಯಾಗುತ್ತಿದ್ದವು. ಬೋಧನಾ ಕಲಿಕಾ ಸಾಮಗ್ರಿಗಳನ್ನು ಅವರು ಎಷ್ಟು ಶ್ರದ್ದೆಯಿಂದ ಬಳಸುತ್ತಿದ್ದರೆಂದರೆ ತಮ್ಮ ಶಾಲೆಯ ಮಕ್ಕಳಿಗೆ ಉತ್ತಮ ಕಲಿಕಾ ಅವಕಾಶವನ್ನು ಒದಗಿಸುವುದು ಅವರ ಆದ್ಯತೆಯಾಗಿತ್ತು. ಸವಾಲುಗಳ ನಡುವೆಯೂ ಕೆಲವು ಶಿಕ್ಷಕರು ಈ ಸಾಮಗ್ರಿಗಳನ್ನು ಬಳಸಲು ಅವಕಾಶಗಳನ್ನು ಕಂಡುಕೊಂಡಿದ್ದಾರೆ, ಆ ಮೂಲಕ ಅವರ ಬೋಧನೆಯು ಉರುಹೊಡೆಯುವಿಕೆಯ ವಿಧಾನದಿಂದ ಅರ್ಥಮಾಡಿಸುವುದರತ್ತ ಹೊರಳಿದೆ. ಇದಕ್ಕೆ ಕಾರಣ ಮೇಲಧಿಕಾರಿಗಳ ಭಯವೋ ಆಡಳಿತಾತ್ಮಕ ಕ್ರಮವೋ ಅಲ್ಲ; ಶಿಕ್ಷಕರ ಸ್ವಂತ ಸಂಕಲ್ಪಶಕ್ತಿ.

***

<u>ಈ ಲೇಖನವನ್ನು ಮೂಲತಃ ಹಿಂದಿಯಲ್ಲಿ ಬರೆಯಲಾಗಿದ್ದು ಅದನ್ನು ನಳಿನಿ ರಾವೇಲ್ ಇಂಗ್ಲಿಷ್‌ಗೆ ಭಾಷಾಂತರಿಸಿದ್ದಾರೆ.</u>

**ಜಾವೇದ್ ಅಖ್ತರ್**: ಇವರು ಅಜೀಂ ಪ್ರೇಮ್‌ಜಿ ಫೌಂಡೇಷನ್ನಿನಲ್ಲಿ ಸಮಾಜ ವಿಜ್ಞಾನದ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಪ್ರಸ್ತುತ ಛತ್ತೀಸ್‌ಘರ್ ದ ರಾಯ್‌ಪುರದಲ್ಲಿ ಕೆಲಸ ಮಾಡುತ್ತಿದ್ದಾರೆ. ಈ ಮೊದಲು ಅವರು ರಾಂಚಿಯ 'ನಲಂದಾ'ದಲ್ಲಿ ಮತ್ತು ರಾಂಚಿಯ

ಎಸ್ಎಸ್ಎ ದಲ್ಲಿ ಕೆಲಸ ಮಾಡುತ್ತಿದ್ದರು. ಇವರು ಭೂವಿಜ್ಞಾನದಲ್ಲಿ ಪಿ.ಎಚ್.ಡಿ ಪದವಿ ಪಡೆದಿದ್ದಾರೆ.

ಅವರನ್ನು ಸಂಪರ್ಕಿಸಲು: javed.akhtar@azimpremjifoundation.org

ಅನುವಾದ: ಪ್ರಜ್ಞಾ ಎಲ್. ಎಸ್. : ಪರಿಶೀಲನೆ: ನಾಗಮಣಿ ಎಸ್. ಎನ್.